

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1383
ಸದಸ್ಯರ ಹೆಸರು : ಶ್ರೀ ಹೆಚ್.ಎಂ.ರಮೇಶ ಗೌಡ
ಉತ್ತರಿಸುವ ದಿನಾಂಕ : 18/03/2020
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಹಾಸ್ಟೆಲ್‌ಗಳ ಸಂಖ್ಯೆ ಎಷ್ಟು; ಎಲ್ಲಾ ಹಾಸ್ಟೆಲ್‌ಗಳಿಗೂ ಮೂಲಭೂತ ಸೌಕರ್ಯಗಳನ್ನು ಸೂಕ್ತ ರೀತಿಯಲ್ಲಿ ಒದಗಿಸಲಾಗಿದೆಯೇ; (ಜಿಲ್ಲಾವಾರು ಮಾಹಿತಿ ನೀಡುವುದು) | ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ರಾಜ್ಯದಲ್ಲಿ 1867 ಪರಿಶಿಷ್ಟ ಜಾತಿಯ ಸರ್ಕಾರಿ ವಿದ್ಯಾರ್ಥಿ ನಿಲಯಗಳನ್ನು ನಡೆಸಲಾಗುತ್ತಿರುತ್ತದೆ. ಈ ಪೈಕಿ 1526 ವಿದ್ಯಾರ್ಥಿ ನಿಲಯಗಳು ಸ್ವಂತ ಕಟ್ಟಡದಲ್ಲಿ ಹಾಗೂ 341 ವಿದ್ಯಾರ್ಥಿ ನಿಲಯಗಳು ಬಾಡಿಗೆ/ ಬಾಡಿಗೆ ರಹಿತ ಕಟ್ಟಡಗಳಲ್ಲಿ ನಡೆಯುತ್ತಿರುತ್ತವೆ. ಈ ಪೈಕಿ 171 ವಿದ್ಯಾರ್ಥಿ ನಿಲಯಗಳಿಗೆ ಸ್ವಂತ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲಾಗಿದ್ದು, ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿರುತ್ತವೆ. 164 ವಿದ್ಯಾರ್ಥಿ ನಿಲಯಗಳಿಗೆ ಸ್ವಂತ ಕಟ್ಟಡ ನಿರ್ಮಾಣ ಮಾಡಲು ನಿವೇಶನಗಳನ್ನು ಪಡೆಯಲಾಗಿದ್ದು, ಈ ಪೈಕಿ ನಿವೇಶನಗಳನ್ನು ಇಲಾಖೆಯ ವಶಕ್ಕೆ ಹಸ್ತಾಂತರ ಪಡೆಯಲಾಗಿರುವ 100 ವಿದ್ಯಾರ್ಥಿ ನಿಲಯಗಳಿಗೆ ಸ್ವಂತ ಕಟ್ಟಡಗಳನ್ನು ನಿರ್ಮಾಣ ಮಾಡಲು ರೂ.483.53 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿರುತ್ತದೆ. ಬಾಕಿ 06 ವಿದ್ಯಾರ್ಥಿ ನಿಲಯಗಳಿಗೆ ನಿವೇಶನಗಳನ್ನು ಪಡೆಯಲು ಕ್ರಮವಹಿಸಲಾಗಿರುತ್ತದೆ. ಕಟ್ಟಡಗಳಿಗೆ ಸಂಬಂಧಿಸಿದಂತೆ ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-1ರಲ್ಲಿ ನೀಡಿದೆ.<br><br>ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ 136 ಮೆಟ್ರಿಕ್ ಪೂರ್ವ ಹಾಗೂ 119 ಮೆಟ್ರಿಕ್ ನಂತರದ ಒಟ್ಟು 255 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿವೆ. ಮೂಲಭೂತ ಸೌಕರ್ಯಗಳನ್ನು ಒದಗಿಸಿರುವ ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-2ರಲ್ಲಿ ನೀಡಿದೆ.<br><br>ಇಲಾಖೆಯ ಎಲ್ಲಾ ವಿದ್ಯಾರ್ಥಿನಿಲಯಗಳಲ್ಲಿನ ನಿಲಯಾರ್ಥಿಗಳಿಗೆ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಅನುದಾನದ ಲಭ್ಯತೆಗನುಗುಣವಾಗಿ ಕಲ್ಪಿಸಲಾಗಿರುತ್ತದೆ. |
| ಆ) | ಹಾಗಿದ್ದಲ್ಲಿ, ಇನ್ನೂ ಹಲವು ಹಾಸ್ಟೆಲ್‌ಗಳು ಶೌಚಾಲಯ, ಅಹಾರ, ಹಾಸಿಗೆ ಇನ್ನಿತರೆ ಮೂಲಭೂತ ವಿಷಯಗಳಲ್ಲಿ ಉತ್ತಮ ಗುಣಮಟ್ಟದಿಂದ ಕೂಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ: | ಬಂದಿದೆ.<br>• ವಿದ್ಯಾರ್ಥಿನಿಲಯಗಳಲ್ಲಿ ನಿಲಯಾರ್ಥಿಗಳಿಗೆ ಅವಶ್ಯಕ ಮೂಲಭೂತ ಸೌಕರ್ಯಗಳಾದ ಹಾಸಿಗೆ ಹೊದಿಕೆ, ಟೂ ಟೈರ್ ಕಾಟ್‌ಗಳು, ಸೋಲಾರ್ ವಾಟರ್ ಹೀಟರ್‌ಗಳು, ಸಿಸಿಟಿವಿಗಳ ಅಳವಡಿಕೆ, ಜಿಂಕ್ ಟ್ರಂಕ್‌ಗಳ ಹಾಗೂ ಇನ್ನಿತರೇ ಅವಶ್ಯಕ ಮೂಲಭೂತ ಸೌಕರ್ಯಗಳನ್ನು ರಾಜ್ಯವಲಯದಿಂದ ನಿಯಮಾನುಸಾರ ಖರೀದಿಸಿ ಒದಗಿಸಲಾಗುತ್ತಿದೆ. |

| | | |
|---|---|---|
| ಇ) | ಬಂದಿದ್ದಲ್ಲಿ ಮೂಲಭೂತ ಸೌಕರ್ಯಗಳು ಉನ್ನತ ಗುಣಮಟ್ಟದಿಂದ ಕೂಡಿರಲು ಸರ್ಕಾರವು ಕೈಗೊಂಡ ಕ್ರಮಗಳೇನು | • ನಿಲಯಾರ್ಥಿಗಳ ವಾಸ್ತವ್ಯಕ್ಕೆ ಅನುಕೂಲವಾಗಲು ಬಾಡಿಗೆ ಕಟ್ಟಡಗಳಲ್ಲಿ ನಡೆಯುತ್ತಿರುವ ವಿದ್ಯಾರ್ಥಿನಿಲಯಗಳಿಗೆ ಸ್ವಂತ ಕಟ್ಟಡಗಳ ನಿರ್ಮಾಣ ಮಾಡಿ, ವಾಸದ ಕೊಠಡಿಗಳು, ಸ್ನಾನದ ಕೊಠಡಿಗಳು, ಶೌಚಾಲಯಗಳು ಸೇರಿದಂತೆ ಮುಂತಾದ ಅಗತ್ಯ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗುತ್ತಿದೆ.<br>• ಸ್ವಂತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳಿಗೆ ದುರಸ್ಥಿ/ಉನ್ನತೀಕರಣ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. |
| ಈ) | ಕೆಲವು ಹಾಸ್ಟೆಲ್‌ಗಳಲ್ಲಿ ಸರಿಯಾದ ಭದ್ರತೆ ಇಲ್ಲದಿರುವುದು ಹಾಗೂ ಆಹಾರವನ್ನು ಕೊಳಕಾದ ಸ್ಥಳದಲ್ಲಿ ತಯಾರಿಸುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಇಂತಹ ಪ್ರಕರಣಗಳು ಕಂಡು ಬಂದಿರುವುದಿಲ್ಲ.<br><br>ಸಮಾಜ ಕಲ್ಯಾಣ ಇಲಾಖೆಯಿಂದ ನಿರ್ವಹಿಸಲಾಗುತ್ತಿರುವ ಪರಿಶಿಷ್ಟ ಜಾತಿ ವಿದ್ಯಾರ್ಥಿ ನಿಲಯಗಳಲ್ಲಿ ಸ್ವಂತ ಕಟ್ಟಡ ಹೊಂದಿರುವ 764 ಸಂಖ್ಯೆಯ ವಿದ್ಯಾರ್ಥಿ ನಿಲಯಗಳಲ್ಲಿ ವಿದ್ಯಾರ್ಥಿಗಳ ರಕ್ಷಣೆ ಹಾಗೂ ಹಿತದೃಷ್ಟಿಯಿಂದ ಸಿ.ಸಿ.ಟಿ.ವಿ ಗಳನ್ನು ಅಳವಡಿಸಲು ಕ್ರಮಕೈಗೊಳ್ಳಲಾಗಿದೆ. ಅನುದಾನದ ಲಭ್ಯತೆಯ ಆಧಾರದ ಮೇಲೆ ಉಳಿದ |
| ಉ) | ಬಂದಿದ್ದಲ್ಲಿ ಈ ಸಂಬಂಧ ಸರ್ಕಾರ ಕೈಗೊಂಡ ಕ್ಷಿಪ್ರ ಕಾರ್ಯಗಳೇನು ಸಂಬಂಧಪಟ್ಟ ಅಧಿಕಾರಿಗಳು ಮುಂಬರುವ ದಿನಗಳಲ್ಲಿ ಈ ರೀತಿಯ ತಪ್ಪು ಎಸಗದಂತೆ ಸರ್ಕಾರವು ಮುನ್ನೆಚ್ಚರಿಕೆ ವಹಿಸುವುದೇ: | ವಿದ್ಯಾರ್ಥಿನಿಲಯಗಳಲ್ಲಿ ಅಳವಡಿಸಲು ಕ್ರಮವಹಿಸಲಾಗಿದೆ.<br><br>ಪರಿಶಿಷ್ಟ ವರ್ಗಗಳ ವಿದ್ಯಾರ್ಥಿನಿಲಯಗಳಲ್ಲಿ ಭದ್ರತೆಯ ಹಿತದೃಷ್ಟಿಯಿಂದ ಸಿ.ಸಿ.ಟಿ.ವಿ ಕ್ಯಾಮರಾಗಳನ್ನು ಅಳವಡಿಸಲಾಗಿದೆ ಹಾಗೂ ಬಾಲಕಿಯರ ವಿದ್ಯಾರ್ಥಿನಿಲಯಗಳಲ್ಲಿ ರಾತ್ರಿ ಕಾವಲುಗಾರರನ್ನು ಹೊರಸಂಪನ್ಮೂಲದಿಂದ ನೇಮಕ ಮಾಡಿಕೊಂಡು ಕಾರ್ಯನಿರ್ವಹಿಸಲಾಗುತ್ತಿದೆ ದಿನಾಂಕ:04-12-2019 ರ ಸುತ್ತೋಲೆಯಲ್ಲಿ ವಿದ್ಯಾರ್ಥಿ ನಿಲಯಗಳ ಅಡುಗೆ ಕೋಣೆಯನ್ನು ಶುಚಿತ್ವವಾಗಿಟ್ಟುಕೊಳ್ಳುವಂತೆ ಎಲ್ಲಾ ಮಟ್ಟದ ಅಧಿಕಾರಿಗಳಿಗೆ ಸೂಚನೆ ನೀಡಲಾಗಿದ್ದು, ಅದರಂತೆ ಅಡುಗೆ ಕೋಣೆಗಳನ್ನು ಸ್ವಚ್ಛವಾಗಿಟ್ಟುಕೊಂಡು ಗುಣಮಟ್ಟದ ಆಹಾರವನ್ನು ವಿದ್ಯಾರ್ಥಿಗಳಿಗೆ ನೀಡಲಾಗುತ್ತಿದೆ. |
| ಊ) | ಹಾಗಿದ್ದಲ್ಲಿ ಹಾಸ್ಟೆಲ್‌ಗಳಲ್ಲಿ ಶೌಚಾಲಯ, ಆಹಾರ, ನೀರು ಹಾಸಿಗೆ ಇನ್ನುಳಿದ ಮೂಲಭೂತ ಸೌಕರ್ಯಗಳನ್ನು ಉನ್ನತ ದರ್ಜೆಗೆ ಏರಿಸಲು ಸರ್ಕಾರದ ವತಿಯಿಂದ ನೀಡಲಾಗಿರುವ ಕಾಲಮಿತಿ ಎಷ್ಟು (ಪೂರ್ಣ ವಿವರ ನೀಡುವುದು). | ಸಮಾಜ ಕಲ್ಯಾಣ ಇಲಾಖೆಯ ಎಲ್ಲಾ ವಿದ್ಯಾರ್ಥಿನಿಲಯಗಳಲ್ಲಿ ಅಗತ್ಯ ಮೂಲಭೂತ ಸೌಕರ್ಯಗಳಾದ ಉತ್ತಮ ಆಹಾರ, ಶುದ್ಧ ಕುಡಿಯುವ ನೀರು, ಹಾಸಿಗೆ ಹೊದಿಕೆ, ಬೆಡ್‌ಶೀಟ್ ಬೆಡ್‌ಸ್ಪ್ರೆಡ್ ಸೊಳ್ಳೆಪರದೆ ಹಾಗೂ ಇನ್ನಿತರೆ ಸೌಕರ್ಯಗಳನ್ನು ಕಲ್ಪಿಸಲು ಈ ಕೆಳಕಂಡ ಕ್ರಮಕೈಗೊಳ್ಳಲಾಗಿದೆ.<br>• <u>**ಆಹಾರ:-**</u> ಇಲಾಖೆಯ ವಿದ್ಯಾರ್ಥಿ ನಿಲಯಗಳಿಗೆ ಉತ್ತಮ ಪೌಷ್ಠಿಕಾಂಶ ಆಹಾರವನ್ನು ಒದಗಿಸಲು 4 ವಿಭಾಗವಾರು ವಿಂಗಡಿಸಿ ಆಯಾಯ ವಿಭಾಗದ ಪ್ರಚಲಿತ ಆಹಾರ ಪದ್ಧತಿಯಂತೆ ಮೆನು ಚಾರ್ಟ್ ಸಿದ್ಧಪಡಿಸಿ ನೀಡಲಾಗಿದ್ದು, ಅದರಂತೆ ಪ್ರತಿ ದಿನ ಊಟೋಪಚಾರವನ್ನು ನೀಡಲಾಗುತ್ತಿದೆ.<br>• <u>**ಶುದ್ಧ ಕುಡಿಯುವ ನೀರು:-**</u> ವಿದ್ಯಾರ್ಥಿನಿಲಯಗಳಲ್ಲಿ ಶುದ್ಧ ಕುಡಿಯುವ ನೀರು ಕಲ್ಪಿಸಲು ವಾಟರ್ ಪ್ಯೂರಿಫೈಯರ್ ಇಲ್ಲದೇ ಇರುವ 198 ವಿದ್ಯಾರ್ಥಿನಿಲಯಗಳಿಗೆ ರೂ.2.97 ಕೋಟಿಗಳ ಅನುದಾನವನ್ನು ಕೆಟಿಪಿಪಿ ನಿಯಮವಳಿಗಳನ್ವಯ ಜಿಲ್ಲಾಮಟ್ಟದಲ್ಲಿ ಅನುಷ್ಠಾನಗೊಳಿಸಲು ಕ್ರಮವಹಿಸಲಾಗಿದೆ.<br>• <u>**ಟೂಟಯರ್ ಕಾಟ್:-**</u> 2018-19ನೇ ಸಾಲಿಗೆ ವಿದ್ಯಾರ್ಥಿನಿಲಯಗಳಿಗೆ ಮಲಗಲು ಮಂಚಗಳನ್ನು ಒದಗಿಸುವ ಸಂಬಂಧ 10651 ಟೂ ಟಯರ್ ಕಾಟ್‌ಗಳನ್ನು ರಾಜ್ಯವಲಯದಿಂದ ರೂ.19.71 ಕೋಟಿಗಳ ವೆಚ್ಚದಲ್ಲಿ 21302 ವಿದ್ಯಾರ್ಥಿಗಳಿಗೆ ಸೌಲಭ್ಯ ಒದಗಿಸಲಾಗಿದೆ. 2019-20ನೇ ಸಾಲಿಗೆ ಅಗತ್ಯವಿರುವ ಟೂ ಟಯರ್ ಕಾಟ್‌ಗಳನ್ನು ರೂ.15.00 ಕೋಟಿಗಳ ವೆಚ್ಚದಲ್ಲಿ ಒದಗಿಸಲು ಸಚಿವ ಸಂಪುಟದ ಅನುಮೋದನೆ ದೊರೆತಿದ್ದು, ಕೆಟಿಪಿಪಿ ನಿಯಮಗಳನ್ವಯ ನಿಯಮಾನುಸಾರ ಖರೀದಿಸಲು ಕ್ರಮವಹಿಸಲಾಗುವುದು. |

| | | |
|---|---|---|
| | | • **<u>ಹಾಸಿಗೆ ಮತ್ತು ದಿಂಬು:-</u>** 2018-19ನೇ ಸಾಲಿನಲ್ಲಿ ಇಲಾಖೆಯ ವಿದ್ಯಾರ್ಥಿನಿಲಯಗಳಿಗೆ ಅಗತ್ಯವಿರುವ 61382 ಸಂಖ್ಯೆಯ ಪ್ಯಾಕೇಟ್ ಸ್ಪ್ರಿಂಗ್ ಮ್ಯಾಟ್ರಸ್‌ಗಳನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘರವರಿಂದ ನಿಯಮಾನುಸಾರ ಖರೀದಿಸಲಾಗಿದೆ. 2019-20ನೇ ಸಾಲಿಗೆ ಅಗತ್ಯವಿರುವ 36,648 ಸಂಖ್ಯೆಯ ಹಾಸಿಗೆ ಮತ್ತು ದಿಂಬುಗಳನ್ನು ರೂ.18.32 ಕೋಟಿಗಳ ವೆಚ್ಚದಲ್ಲಿ ಖರೀದಿಸಲು ಸಚಿವ ಸಂಪುಟದ ಅನುಮೋದನೆ ನೀಡಿದ್ದು, ಸೂಕ್ತ ಕ್ರಮ ಕೈಗೊಳ್ಳಲಾಗುವುದು.<br>• **<u>ಹೊದಿಕೆ:</u>-** 2019-20ನೇ ಸಾಲಿನಲ್ಲಿ ಇಲಾಖೆಯ ವಿದ್ಯಾರ್ಥಿನಿಲಯಗಳಿಗೆ 61.382 ಸಂಖ್ಯೆಯ ಹೊದಿಕೆಗಳನ್ನು ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ ಬೆಂಗಳೂರು ರವರಿಂದ ನಿಯಮಾನುಸಾರ ಖರೀದಿಸಲು ಕ್ರಮವಹಿಸಲಾಗಿದೆ. ಇನ್ನೂ ಅಗತ್ಯವಿರುವ 71,209 ಸಂಖ್ಯೆಯ ಜಮಖಾನ ಬೆಡಶಿಟ್ ಹಾಗೂ ಬೆಡ್‌ಸ್ಪೇಡ್‌ಗಳನ್ನು ರೂ.6.15 ಕೋಟಿಗಳ ವೆಚ್ಚದಲ್ಲಿ ಒದಗಿಸಲು ಸಚಿವ ಸಂಪುಟದ ಅನುಮೋದನೆ ನೀಡಿದ್ದು, ಸೂಕ್ತ ಕ್ರಮ ಕೈಗೊಳ್ಳಲಾಗುವುದು. |

ಸಕಇ 188 ಪಕವಿ 2020

(ಗೋವಿಂದ ಎಂ.ಕಾರಜೋಳ)
ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ
ಮತ್ತು ಸಮಾಜ ಕಲ್ಯಾಣ ಸಚಿವರು

ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ಹೆಚ್.ಎಂ. ರಮೇಶ ಗೌಡ ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ-1166 (1383) ಕ್ಕೆ

ಅನುಬಂಧ-1

## ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ನಡೆಸುತ್ತಿರುವ ಪರಿಶಿಷ್ಟ ಜಾತಿಯ ಸರ್ಕಾರಿ ವಿದ್ಯಾರ್ಥಿ ನಿಲಯಗಳ ಕಟ್ಟಡಗಳ ವಿವರ

| ಕ್ರ.ಸಂ | ಜಿಲ್ಲೆ | ವಿದ್ಯಾರ್ಥಿ ನಿಲಯಗಳ ಸಂಖ್ಯೆ | ಸ್ವಂತ ಕಟ್ಟಡ | ಬಾಡಿಗೆ/ ಬಾಡಿಗೆ ರಹಿತ ಕಟ್ಟಡ | ನಿರ್ಮಾಣ ಹಂತ | ನಿವೇಶನ ಲಭ್ಯತೆ | ನಿವೇಶನ ರಹಿತ |
|---|---|---|---|---|---|---|---|
| 1 | ಬೆಂಗಳೂರು ನಗರ | 55 | 44 | 11 | 5 | 6 | 0 |
| 2 | ಬೆಂಗಳೂರು ಗ್ರಾಮಾಂತರ | 32 | 29 | 3 | 2 | 1 | 0 |
| 3 | ಚಿತ್ರದುರ್ಗ | 90 | 69 | 21 | 7 | 11 | 3 |
| 4 | ದಾವಣಗೆರೆ | 79 | 52 | 12 | 6 | 6 | 0 |
| 5 | ಕೋಲಾರ | 77 | 57 | 20 | 7 | 13 | 0 |
| 6 | ತುಮಕೂರು | 99 | 79 | 20 | 11 | 9 | 0 |
| 7 | ರಾಮನಗರ | 50 | 44 | 6 | 1 | 5 | 0 |
| 8 | ಚಿಕ್ಕಬಳ್ಳಾಪುರ | 72 | 64 | 8 | 5 | 3 | 0 |
| 9 | ಶಿವಮೊಗ್ಗ | 75 | 62 | 13 | 6 | 6 | 1 |
| 10 | ಮೈಸೂರು | 80 | 67 | 13 | 4 | 9 | 0 |
| 11 | ಚಾಮರಾಜನಗರ | 61 | 52 | 9 | 5 | 4 | 0 |
| 12 | ಮಂಡ್ಯ | 67 | 56 | 11 | 5 | 6 | 0 |
| 13 | ಹಾಸನ | 87 | 75 | 12 | 4 | 8 | 0 |
| 14 | ಚಿಕ್ಕಮಗಳೂರು | 58 | 50 | 8 | 5 | 3 | 0 |
| 15 | ಕೊಡಗು | 21 | 18 | 3 | 2 | 1 | 0 |
| 16 | ದಕ್ಷಿಣ ಕನ್ನಡ | 34 | 23 | 11 | 2 | 8 | 1 |
| 17 | ಉಡುಪಿ | 22 | 18 | 4 | 3 | 1 | 0 |
| 18 | ಬೆಳಗಾಂ | 94 | 77 | 17 | 11 | 5 | 1 |
| 19 | ಬಿಜಾಪುರ | 72 | 62 | 10 | 6 | 4 | 0 |
| 20 | ಬಾಗಲಕೋಟೆ | 55 | 49 | 6 | 2 | 4 | 0 |
| 21 | ಧಾರವಾಡ | 30 | 18 | 12 | 9 | 3 | 0 |
| 22 | ಗದಗ್ | 41 | 37 | 4 | 1 | 3 | 0 |

## ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1383 ಕ್ಕೆ ಅನುಬಂಧ – 2

| ಕ್ರ.ಸಂ | ಜಿಲ್ಲೆ | ಸಂಖ್ಯೆ | | | | | |
|---|---|---|---|---|---|---|---|
| | | ಡೈನಿಂಗ್ ಟೇಬಲ್ | ಬೆಡ್ಸ್ ಮತ್ತು ಪಿಲ್ಲೋಸ್ | ಟೂ ಟಯರ್ ಕಾಟ್ | ಡಿಸೇಲ್ ಜನರೇಟರ್ | ಟೂ ಟಯರ್ ಕಾಟ್ | ಸಿ.ಸಿ.ಟಿವಿ ಕ್ಯಾಮೆರಾ |
| | | 2016–17 | | | 2017–18 | | |
| 1 | ಬೆಂಗಳೂರು ನಗರ | 0 | 300 | 50 | 1 | 150 | 4 |
| 2 | ರಾಮನಗರ | 30 | 112 | 56 | 3 | 0 | 0 |
| 3 | ಕೋಲಾರ | 24 | 140 | 70 | 3 | 0 | 5 |
| 4 | ಚಿಕ್ಕಬಳ್ಳಾಪುರ | 0 | 480 | 240 | 3 | 0 | 5 |
| 5 | ತುಮಕೂರು | 54 | 711 | 176 | 5 | 188 | 9 |
| 6 | ಚಿತ್ರದುರ್ಗ | 38 | 160 | 30 | 6 | 0 | 9 |
| 7 | ದಾವಣಗೆರೆ | 67 | 570 | 185 | 7 | 0 | 10 |
| 8 | ಶಿವಮೊಗ್ಗ | 6 | 40 | 20 | 2 | 0 | 2 |
| 9 | ಉಡುಪಿ | 8 | 410 | 0 | 4 | 185 | 6 |
| 10 | ಮೈಸೂರು | 105 | 518 | 0 | 11 | 100 | 0 |
| 11 | ಬೆಳಗಾವಿ | 48 | 626 | 163 | 8 | 0 | 12 |
| 12 | ಬಾಗಲಕೋಟೆ | 2 | 150 | 25 | 1 | 0 | 0 |
| 13 | ಉತ್ತರ ಕನ್ನಡ | 0 | 100 | 0 | 0 | 0 | 0 |
| 14 | ಗದಗ | 41 | 210 | 105 | 3 | 0 | 5 |
| 15 | ಬಿಜಾಪುರ | 12 | 0 | 0 | 1 | 0 | 0 |
| 16 | ಕೊಡಗು | 0 | 20 | 0 | 7 | 10 | 0 |
| 17 | ಹಾವೇರಿ | 23 | 126 | 73 | 4 | 0 | 8 |
| 18 | ಚಿಕ್ಕಮಗಳೂರು | 98 | 709 | 105 | 7 | 291 | 8 |
| 19 | ಚಾಮರಾಜನಗರ | 65 | 274 | 0 | 6 | 287 | 0 |
| 20 | ದಕ್ಷಿಣ ಕನ್ನಡ | 61 | 70 | 0 | 10 | 30 | 14 |
| 21 | ಹಾಸನ | 0 | 40 | 0 | 3 | 20 | 3 |
| 22 | ಮಂಡ್ಯ | 0 | 0 | 0 | 1 | 0 | 0 |
| 23 | ಯಾದಗಿರಿ | 16 | 110 | 0 | 3 | 55 | 0 |
| 24 | ಬೀದರ್ | 8 | 300 | 200 | 3 | 283 | 0 |
| 25 | ಬಳ್ಳಾರಿ | 116 | 921 | 0 | 19 | 0 | 0 |
| 26 | ಗುಲ್ಬರ್ಗಾ | 0 | 54 | 0 | 4 | 112 | 0 |
| 27 | ಧಾರವಾಡ | 0 | 0 | 0 | 2 | 75 | 3 |
| 28 | ರಾಯಚೂರು | 70 | 1124 | 0 | 11 | 0 | 0 |
| 29 | ಕೊಪ್ಪಳ | 57 | 314 | 0 | 8 | 0 | 0 |
| ಒಟ್ಟು | | 949 | 8589 | 1498 | 146 | 1786 | 103 |

| | | | | | | | |
|---|---|---|---|---|---|---|---|
| 23 | ಹಾವೇರಿ | 58 | 48 | 10 | 2 | 8 | 0 |
| 24 | ಕಾರವಾರ | 33 | 26 | 7 | 5 | 2 | 0 |
| 25 | ಗುಲ್ಬರ್ಗಾ | 104 | 83 | 21 | 20 | 1 | 0 |
| 26 | ರಾಯಚೂರು | 73 | 50 | 23 | 6 | 17 | 0 |
| 27 | ಕೊಪ್ಪಳ | 47 | 37 | 10 | 8 | 2 | 0 |
| 28 | ಬಳ್ಳಾರಿ | 87 | 87 | 15 | 5 | 10 | 0 |
| 29 | ಬೀದರ್ | 61 | 48 | 13 | 10 | 3 | 0 |
| 30 | ಯಾದಗಿರಿ | 53 | 45 | 8 | 6 | 2 | 0 |
| | **ಒಟ್ಟು** | **1867** | **1526** | **341** | **171** | **164** | **6** |